

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 1890 (2209)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯ ಮಂತ್ರಿಗಳು

ವಿಷಯ : ನಿರುದ್ಯೋಗ ಸಮಸ್ಯೆಯ ಕುರಿತು

(ಅ) ರಾಜ್ಯದಲ್ಲಿ ನಿರುದ್ಯೋಗ ಸಮಸ್ಯೆ ಹೆಚ್ಚುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ನಿರುದ್ಯೋಗ ಪದವೀಧರರಿಗೆ ಉದ್ಯೋಗ ಒದಗಿಸಿಕೊಡಲು ಸರ್ಕಾರ ಕೈಗೊಂಡ ಕ್ರಮಗಳೇನು;

(ಆ) ಕಳೆದ ಎರಡು ವರ್ಷಗಳಲ್ಲಿ ಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿ ಎಷ್ಟು ಉದ್ಯೋಗಗಳನ್ನು ಸೃಷ್ಟಿಸಲಾಗಿದೆ ; (ಇಲಾಖಾವಾರು, ಕ್ಷೇತ್ರವಾರು ಮತ್ತು ಹುದ್ದೆವಾರು ವಿವರಗಳನ್ನು ನೀಡುವುದು)

(ಇ) ಸರ್ಕಾರ ವಿವಿಧ ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ನಿವೃತ್ತ ನೌಕರ/ಅಧಿಕಾರಿಗಳನ್ನು ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ನೇಮಿಸುತ್ತಿರುವುದರಿಂದ ನಿರುದ್ಯೋಗ ಪದವೀಧರರು ಉದ್ಯೋಗ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ನಿವೃತ್ತ ನೌಕರರ ಬದಲು ನಿರುದ್ಯೋಗ ಪದವೀಧರರನ್ನು ನೇಮಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; ನಿವೃತ್ತ ನೌಕರರ ಬದಲು ನಿರುದ್ಯೋಗ ಪದವೀಧರರನ್ನು ನೇಮಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ;

(ಈ) ರಾಜ್ಯದ ವಿವಿಧ ಇಲಾಖೆಗಳಲ್ಲಿ ಸಚಿವಾಲಯವು ಸೇರಿದಂತೆ ಎಷ್ಟು ಜನ ನಿವೃತ್ತ ನೌಕರ/ಅಧಿಕಾರಿಗಳನ್ನು ಗುತ್ತಿಗೆ ಮತ್ತು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ ; (ಇಲಾಖಾವಾರು ಮತ್ತು ಜಿಲ್ಲಾವಾರು ಮಾಹಿತಿ ನೀಡುವುದು)

(ಉ) ನಿವೃತ್ತ ನೌಕರರು/ಅಧಿಕಾರಿಗಳನ್ನು ಗುತ್ತಿಗೆ/ಹೊರಗುತ್ತಿಗೆ ಆಧಾರದಲ್ಲಿ ನೇಮಿಸುವ ಬದಲು ನಿರುದ್ಯೋಗ ಪದವೀಧರರನ್ನು ಸರ್ಕಾರ ನೇಮಕಾತಿ ಮಾಡಬಾರದೇಕೆ; ಇದಕ್ಕಿರುವ ಅಡೆತಡೆಗಳೇನು;

(ಊ) ನಿರುದ್ಯೋಗ ಸಮಸ್ಯೆ ತಡೆಗಟ್ಟಲು ಸರ್ಕಾರ ಕೈಗೊಂಡ ಯೋಜನೆಗಳು/ಕ್ರಮಗಳು ಯಾವುವು ? (ವಿವರ ನೀಡುವುದು)